# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 379
ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್
ಉತ್ತರಿಸಬೇಕಾದ ದಿನಾಂಕ : 29.12.2022
(ವರ್ಗಾವಣೆಗೊಂಡ ಪ್ರಶ್ನೆ)
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದಲ್ಲಿರುವ ಲ್ಯಾನ್ಸ್ ಡೌನ್ ಕಟ್ಟಡ / ದೇವರಾಜ ಮಾರುಕಟ್ಟೆ / ವಿವಿ ಮಾರುಕಟ್ಟೆ ಹಾಗೂ ಅಗ್ನಿಶಾಮಕ ದಳದ ಕಟ್ಟಡಗಳು ಶಿಥಿಲಗೊಂಡ ಕುಸಿದಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೈಸೂರು ನಗರದಲ್ಲಿರುವ ಲ್ಯಾನ್ಸ್.ಡೌನ್ ಕಟ್ಟಡ / ದೇವರಾಜ ಮಾರುಕಟ್ಟೆ / ವಿವಿ ಮಾರುಕಟ್ಟೆ ಕಟ್ಟಡಗಳು ಶಿಥಿಲಗೊಂಡು ಕುಸಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆ ಹಾಗೂ ಅಗ್ನಿಶಾಮಕ ದಳದ ಕಟ್ಟಡವು ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ಕಟ್ಟಡಗಳ ಪುನರ್ ನಿರ್ಮಾಣಕ್ಕೆ / ನವೀಕರಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ರಿಟ್ ಅರ್ಜಿ ಸಂಖ್ಯೆ: 60550/2016 ರಲ್ಲಿ ಮಾನ್ಯ ನ್ಯಾಯಾಲಯವು ನೀಡಿದ ತೀರ್ಪಿನನ್ವಯ ಹಾಗೂ ಸರ್ಕಾರದ ಸೂಚನೆಯಂತೆ ದಿನಾಂಕ:03-08-2019 ರಂದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ವಿಶೇಷ ಪಾರಂಪರಿಕ ಸಮಿತಿಯಲ್ಲಿ ದೇವರಾಜ ಮಾರುಕಟ್ಟೆ ನವೀಕರಣ/ಪುನರ್ ನಿರ್ಮಾಣದ ಕುರಿತು ವರದಿ ನೀಡುವಂತೆ ತಜ್ಞರ ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯು ದಿನಾಂಕ: 02-12-2019ರಂದು ಅಂತಿಮ ಸಭೆ ನಡೆಸಿ, "ಹಾಲಿ ಕಟ್ಟಡವನ್ನು ತೆರವುಗೊಳಿಸಿ ಹಾಲಿ ಇರುವ ಕಟ್ಟಡದ ಎತ್ತರಕ್ಕೆ ಸೀಮಿತಗೊಳಿಸಿ, ಪ್ರಸ್ತುತ ಪಾರಂಪರಿಕ ಶೈಲಿಯಲ್ಲಿಯೇ ವಿನ್ಯಾಸದಲ್ಲಿ ಹಾಗೂ ಮಾದರಿಯಲ್ಲಿ ಹೊಸದಾಗಿ ಕಟ್ಟಡ ಪುನರ್ ನಿರ್ಮಾಣ ಮಾಡಬಹುದೆಂದು" ಅಭಿಪ್ರಾಯಪಟ್ಟಿರುತ್ತದೆ.<br><br>ಸದರಿ ಅಭಿಪ್ರಾಯವನ್ನು ದಿನಾಂಕ: 10-12-2019 ರಂದು ನಡೆದ ವಿಶೇಷ ಪಾರಂಪರಿಕ ಸಮಿತಿ ಸಭೆಯಲ್ಲಿ ಮಂಡಿಸಲಾಗಿದ್ದು, ತಜ್ಞರ ಸಮಿತಿಯ ವರದಿಯನ್ನು ವಿಶೇಷ ಪಾರಂಪರಿಕ ಸಮಿತಿಯು ಒಪ್ಪಿ, ನಗರ ಪಾಲಿಕೆಯ ಕೌನ್ಸಿಲ್ ಸಭೆಯ ಮುಂದೆ ಮಂಡಿಸಿ, ಸರ್ಕಾರಕ್ಕೆ ಮಾಹಿತಿ ನೀಡುವಂತೆ ಸೂಚಿಸಲಾದಂತೆ, ದಿನಾಂಕ: 30-01-2020 ರಂದು ನಡೆದ ಕೌನ್ಸಿಲ್ ಸಭೆಯಲ್ಲಿ ಮಂಡಿಸಿ, ಸಭೆಯ ನಿರ್ಣಯದಂತೆ ಕಟ್ಟಡವನ್ನು ತೆರವುಗೊಳಿಸಿ ಹಾಲಿ ಇರುವ ಶೈಲಿಯಲ್ಲಿ ಕಟ್ಟಡ ನಿರ್ಮಿಸಲು ಅನುಮೋದನೆ ಕೋರಿ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ.<br><br>ದಿನಾಂಕ: 10-12-2019 ರಂದು ನಡೆದ ವಿಶೇಷ ಪಾರಂಪರಿಕ ಸಮಿತಿ ಸಭೆಯ ತೀರ್ಮಾನ ಹಾಗೂ ದಿನಾಂಕ: 30-01-2020 ರಂದು ನಡೆದ ಮೈಸೂರು ಮಹಾನಗರ ಪಾಲಿಕೆಯ ಸಾಮಾನ್ಯ ಕೌನ್ಸಿಲ್ ಸಭೆಯ ತೀರ್ಮಾನದ ವಿರುದ್ಧ ಶ್ರೀ ಶ್ರಿಜಯ್ ದೇವರಾಜ ಅರಸು ಮತ್ತು ಇತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ W.P.15215/2020 ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಸದರಿ ನಿರ್ಣಯದ ಮೇಲೆ ತಡೆಯಾಜ್ಞೆ ನೀಡಿರುತ್ತದೆ. |
| ಇ) | ಇಲ್ಲದಿದ್ದಲ್ಲಿ, ಈ ಕಟ್ಟಡಗಳ ಪುನರ್ ನಿರ್ಮಾಣಕ್ಕೆ / ನವೀಕರಣಕ್ಕೆ ಇರುವ ತೊಡಕುಗಳೇನು; (ವಿವರ ನೀಡುವುದು) | |

| | | |
|---|---|---|
| | | ಸರ್ಕಾರದ ಅಧಿಸೂಚನೆ ಸಂಖ್ಯೆ: ಯು.ಡಿ.ಡಿ/ 04/ ಟಿ.ಟಿ.ಪಿ./2013/ ಬೆಂಗಳೂರು ದಿನಾಂಕ: 24-04-2020 ರಂದು ಆದೇಶಿಸಿರುವಂತೆ ಹಾಲಿ ಇರುವ ವಿಶೇಷ ಪಾರಂಪರಿಕ ಸಮಿತಿಯನ್ನು ರದ್ದುಗೊಳಿಸಿ. ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗಣ್ಯವಕ್ತಿಗಳು ಮತ್ತು ವಿವಿಧ ಇಲಾಖೆಯ ಮುಖ್ಯಸ್ಥರನ್ನು ಸದಸ್ಯರನ್ನಾಗಿ ಮಾಡಿ ಪಾರಂಪರಿಕ ಸಂರಕ್ಷಣಾ ಸಮಿತಿಯನ್ನು ರಚಿಸಲಾಗಿರುತ್ತದೆ.<br><br>ಮುಂದುವರೆದು, ದೇವರಾಜ ಮಾರುಕಟ್ಟೆ / ಲ್ಯಾನ್ಸ್ ಡೌನ್ ಕಟ್ಟಡಗಳ ನವೀಕರಣ / ಪುನರ್‌ನಿರ್ಮಾಣ ಮಾಡುವ ವಿಷಯವನ್ನು ಪಾರಂಪರಿಕ ಸಂರಕ್ಷಣಾ ಸಮಿತಿ ಮುಂದೆ ದಿನಾಂಕ: 13-04-2022 ರಂದು ಮಂಡಿಸಿದ್ದು, ಸಮಿತಿಯಲ್ಲಿ "ದೇವರಾಜ ಮಾರುಕಟ್ಟೆ ಮತ್ತು ಲ್ಯಾನ್ಸ್.ಡೌನ್ ಕಟ್ಟಡವು ಶಿಥಿಲಾವಸ್ಥೆಯಲ್ಲಿರುವುದು ವಿವಿಧ ತಜ್ಞರ ಸಮಿತಿಯ ವರದಿಗಳಲ್ಲಿ ತಿಳಿಸಿರುವುದರಿಂದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದೇವರಾಜ ಮಾರುಕಟ್ಟೆ ಮತ್ತು ಲ್ಯಾನ್ಸ್.ಡೌನ್ ಕಟ್ಟಡವನ್ನು ನೆಲಸಮಗೊಳಿಸಿ ಈಗಿರುವ ವಾಸ್ತು ಶೈಲಿಯಲ್ಲಿಯೇ ಹಾಗೂ ಪಾರಂಪರಿಕ ವಸ್ತು ಸಾಮಾಗ್ರಿಗಳನ್ನು ಉಪಯೋಗಿಸಿಕೊಂಡು ಮರು ನಿರ್ಮಾಣ ಮಾಡುವುದು ಸೂಕ್ತ ಎಂದು ಸಮಿತಿಯು ಬಹುಮತದಿಂದ ನಿರ್ಣಯಿಸಲಾಗಿರುತ್ತದೆ. ಸದರಿ ಮಾಹಿತಿಯನ್ನು ಈಗಾಗಲೇ ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ ಹಾಗೂ ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿ ಇರುವ ಹಿನ್ನೆಲೆಯಲ್ಲಿ ಮಾನ್ಯ ನ್ಯಾಯಾಲಯದ ಅಂತಿಮ ಆದೇಶದಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.<br><br>ವಿ.ವಿ. ಮಾರುಕಟ್ಟೆ ಕಟ್ಟಡದ ನವೀಕರಣಕ್ಕೆ ಸಂಬಂಧಿಸಿದಂತೆ ಕಾಮಗಾರಿಯ ಡಿ.ಪಿ.ಆರ್. ಸಿದ್ದಪಡಿಸಲಾಗುತ್ತಿದೆ. |
| ಈ) | ಈ ನಿಟ್ಟಿನಲ್ಲಿ ಸರ್ಕಾರ ಅನುದಾನವನ್ನು ಮೀಸಲಿಟ್ಟಿದೆಯೇ; (ವಿವರ ನೀಡುವುದು) | ದೇವರಾಜ ಮಾರುಕಟ್ಟೆಯನ್ನು ಸಂಪೂರ್ಣವಾಗಿ ತೆರವುಗೊಳಿಸಿ, ಪಾರಂಪರಿಕ ಶೈಲಿಯಲ್ಲಿಯೇ ಪುನರ್ ನಿರ್ಮಾಣ ಮಾಡಲು ಅನುಮೋದನೆ ಹಾಗೂ ನಿರ್ಮಾಣಕ್ಕಾಗಿ ರೂ.98.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ವಸ್ತುಸ್ಥಿತಿಯ ವರದಿಯೊಂದಿಗೆ ಪ್ರಸ್ತಾವನೆಯನ್ನು ಮರುಸಲ್ಲಿಸುವಂತೆ ಪೌರಾಡಳಿತ ನಿರ್ದೇಶಕರಿಗೆ ತಿಳಿಸಲಾಗಿದೆ.<br><br>ಆದರೆ, ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿ ಇರುವ ಹಿನ್ನೆಲೆಯಲ್ಲಿ ಮಾನ್ಯ ನ್ಯಾಯಾಲಯದ ಅಂತಿಮ ಆದೇಶದಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಉ) | ಇಲ್ಲದಿದ್ದಲ್ಲಿ, ಕಾರಣ ನೀಡುವುದು? | |

**ಸಂಖ್ಯೆ: ನಅಇ 147 ಎಸಿಎಂ 2022**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು